# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1471
ವಿಧಾನ ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 10.03.2022.
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದ ಜೀವ ನದಿಗಳಿಗೆ ಅಡ್ಡಲಾಗಿ ಕಟ್ಟಲಾಗಿರುವ ಅಣೆಕಟ್ಟುಗಳಲ್ಲಿ ಹೂಳು ತುಂಬಿಕೊಂಡಿರುವ ಪರಿಣಾಮ ನೀರು ಸಂಗ್ರಹಣೆ ಕಡಿಮೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಯಾವ ಕ್ರಮವನ್ನು ಕೈಗೊಳ್ಳಲಾಗಿದೆ; (ಕಳೆದ 5 ವರ್ಷಗಳಲ್ಲಿ ಹೂಳು ತೆಗೆಯಲು ಕೈಗೊಂಡ ಕಾಮಗಾರಿಯ ವಿವರ ಹಾಗೂ ವೆಚ್ಚವಾದ ಹಣದ ಬಗ್ಗೆ ವಿವರ ನೀಡುವುದು) | ಕಾವೇರಿ ನೀರಾವರಿ ನಿಗಮ ವ್ಯಾಪ್ತಿಯಲ್ಲಿನ ಹಾರಂಗಿ ಜಲಾಶಯದಲ್ಲಿ ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೃಷ್ಣರಾಜ ಸಾಗರ ವತಿಯಿಂದ, ಬ್ಯಾತಿಮೆಟ್ರಿ ಸರ್ವೆಯನ್ನು, 2018–19ನೇ ಸಾಲಿನಲ್ಲಿ ನಡೆಸಿದ್ದು, ಸದರಿ ಜಲಾಶಯದಲ್ಲಿ ಶೇಖರಣೆಯಾಗಿರುವ ಹೂಳಿನ ಪರಿಮಾಣ 1.236 ಟಿ.ಎಂ.ಸಿ (ಶೇಕಡ 14.53) ಎಂದು ಅಂದಾಜಿಸಲಾಗಿದೆ. ಈ ಪರಿಮಾಣದಲ್ಲಿ 0.031 ಟಿ.ಎಂ.ಸಿಗಳಷ್ಟು ಹೂಳನ್ನು ರೂ.39.00 ಕೋಟಿ ಮೊತ್ತದಲ್ಲಿ ತೆಗೆಯಲು "ಹಾರಂಗಿ ಜಲಾನಯನ ಪ್ರದೇಶ ಮತ್ತು ನದಿ ಪಾತ್ರದ ಪುನಶ್ಚೇತನ ಹಾಗೂ ರಕ್ಷಣಾ ಕಾಮಗಾರಿಯ" ರೂ. 130.00 ಕೋಟಿ ಮೊತ್ತದ ಅಂದಾಜಿನಲ್ಲಿ ಪರಿಗಣಿಸಲಾಗಿದ್ದು, ಪ್ರಸ್ತುತ ಟೆಂಡರ್ ಪ್ರಕ್ರಿಯೆಯಲ್ಲಿರುತ್ತದೆ.<br>ಜಲಾಶಯಗಳಲ್ಲಿ ಜಲಾಶಯ ನಿರ್ಮಾಣವಾದಾಗಿನಿಂದ ಇಲ್ಲಿಯವರೆಗೆ ಹೂಳಿನ ಸಂಗ್ರಹಣಾ ಪ್ರಮಾಣವು ಒಟ್ಟಾರೆ ಜಲಾಶಯದ ಪ್ರಮಾಣಕ್ಕೆ ಹೋಲಿಸಿದಾಗ ಗಣನೀಯವಾಗಿ ಕಡಿಮೆ ಇರುವ ಹಿನ್ನೆಲೆಯಲ್ಲಿ ಹೂಳೆತ್ತುವ ಪ್ರಮೇಯ ಉದ್ಭವಿಸುವುದಿಲ್ಲ. ಆದಾಗ್ಯೂ ಪ್ರತಿ ಸಾಲಿನ ಪ್ರವಾಹದ ಒಳಹರಿವಿನ ಸಂದರ್ಭದಲ್ಲಿ ಅಣೆಕಟ್ಟಿನ River sluice ಅನ್ನು ಉಪಯೋಗಿಸಿ ಹಾಗೂ ಜಲಾನಯನ ಪ್ರದೇಶ ಅಭಿವೃದ್ಧಿ ಯೋಜನೆಗಳ ಅನುಷ್ಠಾನದ ಮುಖೇನ ಹೂಳಿನ ಮಟ್ಟವನ್ನು ನಿಯಂತ್ರಣಗೊಳಿಸಲಾಗುತ್ತಿದೆ. |
| ಆ) | ರಾಜ್ಯದಲ್ಲಿ ನದಿಗಳು, ಹಳ್ಳ–ಕೊಳ್ಳ, ಕೆರೆ ಮತ್ತು ಚೆಕ್‌ಡ್ಯಾಂ ಸೇರಿದಂತೆ ಜಲ ಮೂಲಗಳು ಕಲುಷಿತಗೊಳ್ಳುತ್ತಿರುವುದನ್ನು ತಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು: (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ನದಿಗಳು, ಹಳ್ಳ–ಕೊಳ್ಳ, ಕೆರೆ ಮತ್ತು ಚೆಕ್ ಡ್ಯಾಂ ಸೇರಿದಂತೆ ಜಲಮೂಲಗಳು ಕಲುಷಿತಗೊಳ್ಳುತ್ತಿರುವುದನ್ನು ತಡೆಯುವ ಯಾವುದೇ ಪ್ರಸ್ತಾವನೆಗಳು ಜಲ ಸಂಪನ್ಮೂಲ ಇಲಾಖೆ (ಭಾರಿ ಮತ್ತು ಮಧ್ಯಮ)ಯಡಿ ಇರುವುದಿಲ್ಲ. |

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಇ) | ರಾಷ್ಟ್ರೀಯ ನದಿ ಸಂರಕ್ಷಣಾ ಯೋಜನೆ ಅಡಿ ರಾಜ್ಯದಲ್ಲಿ ಮಲೀನಗೊಂಡಿರುವ ನದಿಗಳ ಶುದ್ಧೀಕರಣಕ್ಕೆ ಎಷ್ಟು ಹಣ ಬಿಡುಗಡೆಯಾಗಿದೆ ಹಾಗೂ ರಾಜ್ಯ ಸರ್ಕಾರ ಎಷ್ಟು ಹಣ ವಿನಿಯೋಗಿಸಿದೆ? (ಸಂಪೂರ್ಣ ವಿವರ ನೀಡುವುದು) | ರಾಷ್ಟ್ರೀಯ ನದಿ ಸಂರಕ್ಷಣಾ ಯೋಜನೆಯಡಿ ಯಾವುದೇ ಕಾಮಗಾರಿಯನ್ನು ಕೈಗೊಂಡಿರುವುದಿಲ್ಲ. |

ಜಸಂಇ 64 ಎಂಎಲ್ಎ 2022

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು